ಡಾ॥ ಕೆ. ಜಿ. ವಸಂತಮಾಧವ

# ಮರವಂತೆ-ತ್ರಾಸಿಯ ವೀರಗಲ್ಲುಗಳು

ಕುಂದಾಪುರ ತಾಲೋಕು ತ್ರಾಸಿ ಗ್ರಾಮದ ವೀರಗಲ್ಲು ವಿಜಯನಗರ ಅರಸರ ಆಳ್ವಿಕೆಯ ಕಾಲದ್ದು. ಇದು ಹೋರಾಟದಲ್ಲಿ ಮಡಿದ ವೀರನ ಸ್ಮಾರಕವಾಗಿ ನೆಟ್ಟ ಕಲ್ಲು. ಇದು ಸಮುದ್ರಕಿನಾರೆಯಲ್ಲಿದೆ. ಈ ವೀರಗಲ್ಲಿನಿಂದ ಉತ್ತರಕ್ಕೆ ಒಂದು ಮೈಲು ಅಂತರದಲ್ಲಿ ಇನ್ನೊಂದು ವೀರಗಲ್ಲು ಇದೆ. ಮರವಂತೆಯನ್ನು ಜಕ್ಕನಕಟ್ಟೆ ಎಂತಲೂ ಸ್ಥಳೀಯರು ಕರೆಯುತ್ತಾರೆ. ಈ ಎರಡು ವೀರಗಲ್ಲುಗಳಲ್ಲಿ ಶಾಸನಗಳಿವೆ. ಆದರೆ ಮರವಂತೆ ವೀರಗಲ್ಲಿನ ಶಾಸನದಲ್ಲಿ ಶಕವರ್ಷ ಇಲ್ಲ ಮತ್ತು ಅದು ಅಪೂರ್ಣವಾಗಿದೆ. ತ್ರಾಸಿಯ ವೀರಗಲ್ಲಿನಲ್ಲಿ ಶಕವರ್ಷದ ಸಹಿತ ಹೆಚ್ಚಿನ ವಿವರಗಳಿವೆ. ಈ ಶಾಸನ ಹೆಚ್ಚಿನ ಕಡೆಯಲ್ಲಿ ಓದಲಾಗದಷ್ಟು ನಾಶವಾಗಿದೆ. ತ್ರಾಸಿಯ ವೀರಗಲ್ಲಿನ ಇರುವಿಕೆ ಮತ್ತು ಇದರ ಶಾಸನ ಸಾರಾಂಶ ಶಾಸನ ಖಾತೆಯ ವರದಿಯಲ್ಲಿ ನಮೂದಿಸಿದೆ.[1]

ಮರವಂತೆ ವೀರಗಲ್ಲಿನ ಇರುವಿಕೆಯನ್ನು ದಿವಂಗತ ಡಾ॥ ಪಿ. ಗುರುರಾಜಭಟ್ಟರು ಗುರುತಿಸಿದ್ದಾರೆ. ಮರವಂತೆ ಮತ್ತು ತ್ರಾಸಿಯ ವೀರಗಲ್ಲುಗಳ ಶಾಸನಗಳನ್ನು ಪರೀಕ್ಷಿಸಿದಾಗ ಇವುಗಳೊಳಗೆ ನಿಕಟ ಸಂಬಂಧವಿದೆಯೆಂಬುದೂ ತಿಳಿದುಬರುತ್ತದೆ.

ಮರವಂತೆ ವೀರಗಲ್ಲು : ಈ ವೀರಗಲ್ಲಿನಲ್ಲಿ ವೀರನು ಹೋರಾಡುವ ಚಿತ್ರ ಉತ್ತಮ ರೀತಿಯಲ್ಲಿ ಕೆತ್ತಿಬಂದಿದೆ. ಇದರಲ್ಲಿ ವೀರನು ಗುರಾಣಿ ಹಿಡಿದು ಯುದ್ಧಕ್ಕೆ ಹೋಗುವುದನ್ನೂ ಅವನ ಹಿಂದೆ ಎರಡು ಜನರು ಬೆಂಗಾವಲಾಗಿರುವುದನ್ನೂ ಕೆತ್ತಿದೆ. ಇದರ ತುದಿಯಲ್ಲಿ ಅರ್ಧಚಂದ್ರ, ಸೂರ್ಯ ಹಾಗೂ ಮಧ್ಯದಲ್ಲಿ ಮಕರಚಿಹ್ನೆ ಇದೆ. ಇದರಲ್ಲಿರುವ ಶಾಸನವು ವೀರ ಹೋರಾಡಿದ್ದನ್ನು ಈರೀತಿ ತಿಳಿಸಿದೆ: "ಬೈಚನಾಯಕನ ಮಗ..ಲಪನಾಳಿಗೇರಿಯ ಆಜರಿ ಒಳೆಯ ಕಾದು–ಯಕನ ಮೊಂಮಗ." ಒಟ್ಟಿನಲ್ಲಿ, ಈ ಪ್ರದೇಶದಲ್ಲಿ ಕದನವಾದದ್ದನ್ನು ಮತ್ತು ವೀರನು ಕಾದಿದ್ದನ್ನು ಈ ಶಾಸನದಿಂದ ತಿಳಿಯಬಹುದು.

ತ್ರಾಸಿಯ ವೀರಗಲ್ಲು[2] : ಇದು ನಾಲ್ಕು ಅಂಕಣವಿರುವ ವೀರಗಲ್ಲು. ಕೆಳಗಿನಿಂದ ಮೇಲಕ್ಕೆ–ಒಂದನೇ ಅಂಕಣದಲ್ಲಿ ವೀರನು ಖಡ್ಗ ಹಿಡಿದು ಕುದುರೆ ಮೇಲೆ ಕುಳಿತು ವೈರಿಗಳನ್ನು, ಸೈನ್ಯವನ್ನು ಎದುರಿಸುವುದು ; ಎರಡನೇ ಅಂಕಣದಲ್ಲಿ ವೀರನು ಹೋರಾಡಿ ಅಸುವು ನೀಗುವುದು ಹಾಗೂ ವೀರನ ಕೈಯಲ್ಲಿ ಕೋವಿಯಂತೆ ಇರುವ ಆಯುಧವಿರುವುದು; ಮೂರನೇ ಅಂಕಣದಲ್ಲಿ ಹೋರಾಡಿದ ವ್ಯಕ್ತಿಯನ್ನು ಪೂಜಿಸುವುದು. ಇದರೊಂದಿಗೆ ಸತಿಯಾದ ಮಹಿಳೆಯ ಚಿತ್ರವೂ ನಾಲ್ಕನೇ ಅಂಕಣದಲ್ಲಿದೆ. ಧ್ಯಾನಮುದ್ರೆಯ ಜನ ಇದರ ಬಲತುದಿಯಲ್ಲಿ ದೀಪ ಹಿಡಿದ ಚಿತ್ರಗಳೂ ಕೆತ್ತಲ್ಪಟ್ಟಿವೆ. ಈ ನಾಲ್ಕು ಅಂಕಣಗಳ ಮಧ್ಯದಲ್ಲಿ ಕನ್ನಡ ಭಾಷೆಯಲ್ಲಿ ಬರೆದ ಶಾಸನವಿದೆ. ಅಳಿದುಳಿದ ಅಕ್ಷರಗಳಿಂದ ಈ ಶಾಸನವು ಈ ಮುಂದಿನ

1. *ARSIE,* 1931, No. 363
2. ಜಿ. ಅಚ್ಯುತ ಹೆಬ್ಬಾರ ಅವರು ನೀಡಿದ ಈ ಶಾಸನದ ಪ್ರತಿಯಂತೆ. ಈ ವೀರಗಲ್ಲಿನ ಚಿತ್ರ ನೋಡಿ: Dr. P. Gururaja Bhat : *Studies in Tuluva History and Culture*, Plate No. 359 (b)

ಸಂಗತಿಯನ್ನು ತಿಳಿಸುತ್ತದೆ : ಹೊಂನಾದೇವಿ ಅಂಮನವರು ಹಾಡುವಳಿಯಲ್ಲಿ ಆಳಿಕೊಂಡಿರುವಾಗ ಪಡುಕೋಣನಾಡ ಹಾಲೆಯ ಬಳಿ ನಾಯಕರು ಪರಂಗದ ಕಪಿತವರೊಡನೆ ಕಾದಿ ಅಸುನೀಗಿದನೆಂದು ತಿಳಿಸುತ್ತದೆ. ಇಷ್ಟಲ್ಲದೇ ಇವನ ಸ್ಮರಣೆಯಾಗಿ ಇಲ್ಲಿಯ ಬಸವಕ್ಕನಾಯಕತಿ ವೀರಗಲ್ಲನ್ನು ಶಕ ೧೪೬೮ ಕಾರ್ತಿಕ ೫ = ಕ್ರಿ.ಶ. ೧೫೪೬ರಲ್ಲಿ ನೆಟ್ಟಳು.

ಈ ಶಾಸನದಲ್ಲಿ ತಿಳಿದುಬರುವ 'ಪರಂಗದ ಕಪಿತ'ರೆಂದರೆ ಪೋರ್ತುಗೀಜರಾಗಿರುತ್ತಾರೆ. ಇವರು ಭಟ್ಕಳವನ್ನು ಸುಟ್ಟು ಧ್ವಂಸ ಮಾಡಿದರೆಂದು ಕ್ರಿ.ಶ. ೧೫೪೨ರ ದಾಖಲೆಗಳಿಂದ ತಿಳಿದುಬರುತ್ತದೆ.[3] ಈ ಶಾಸನದಲ್ಲಿ ತಿಳಿಸಿದ ಹೊಂನಾದೇವಿ ಭಟ್ಕಳ ಬೈಂದೂರುಗಳಲ್ಲಿ ಹಾಡುವಳ್ಳಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಆಳಿದ ಚೆಂನಾದೇವಿ ಅಂಮ. ಈ ಶಾಸನದಂತೆ, ಪೋರ್ತುಗೀಜರು ಈ ಪ್ರದೇಶದ ಮೇಲೆ ದಾಳಿ ಇಟ್ಟಿದ್ದರೆಂದು ತಿಳಿದುಬರುತ್ತದೆ. ಈ ಪ್ರದೇಶ ಸಮುದ್ರ ಮತ್ತು ಹೊಳೆಯ ಸಮೀಪವಿದ್ದು ಫಲಭರಿತವಾಗಿದ್ದುದರಿಂದ ಪೋರ್ತುಗೀಜರು ದಾಳಿ ನಡೆಸಿರಬೇಕು. ಈ ಪ್ರದೇಶದ ಮೇಲೆ ಪೋರ್ತುಗೀಜರಿಗೆ ಕಾಕದೃಷ್ಟಿಯಿದ್ದಿತೆಂದು ಇವರ ಕ್ರಿ.ಶ. ೧೬೩೦ರ ದಾಖಲೆಯಿಂದ ತಿಳಿದುಬರುತ್ತದೆ.[4] ಒಟ್ಟಿನಲ್ಲಿ, ಮರವಂತೆ ಮತ್ತು ತ್ರಾಸಿ ಪ್ರದೇಶಗಳಲ್ಲಿ ಯುದ್ಧವಾಗಿರಬೇಕು. ಪೋರ್ತುಗೀಜರನ್ನು ಬೈಚಯನಾಯಕ ಮಗ (ಕ)ಲಪನಾಯಕ ಮತ್ತು ಹಾಲೆ ಬಳಿ ಪಡುಕೋಣನಾಡ–ನಾಯಕ ಎದುರಿಸಿದರು. ಈ ಇಬ್ಬರು ವೀರರು ಚೆಂನಾದೇವಿಯ ಸೈನ್ಯದ ಅಧಿಕಾರಿಗಳಾಗಿರಬೇಕು. ಪಡುಕೋಣೆಯಲ್ಲಿ ಅಜೀರ್ಣಗೊಂಡ ಕೋಟೆ ಇರುವುದರಿಂದ, ಇಲ್ಲಿ ಅವರನ್ನು ಚೆಂನಾದೇವಿಯು ಸೈನ್ಯಾಧಿಕಾರಿಗಳನ್ನಾಗಿ ನೇಮಿಸಿರಬೇಕು. ಹಾಡುವಳ್ಳಿರಾಜ್ಯ ಈ ವೀರಗಲ್ಲಿನ ಸ್ಥಳದವರೆಗೆ ಹಬ್ಬಿದ್ದಿತೆಂದು ತಿಳಿದರೆ ತಪ್ಪಾಗಲಿಕ್ಕಿಲ್ಲ. ಇಲ್ಲಿ ಹೇಳಿದ ನಾಯಕರು 'ಒಳಿ' ಕಟ್ಟಳೆಯನ್ನು ಹೊಂದಿದ ಅಬ್ರಾಹ್ಮಣ ಶೂರ ಶೂದ್ರಜನಾಂಗ.[5] ಈ ವೀರಗಲ್ಲನ್ನು ಬಸವಕ್ಕನಾಯಕತಿ ನೆಟ್ಟಳೆಂದು ಓದುವಾಗ ಇವರ ಸಮಾಜದಲ್ಲಿ ಸ್ತ್ರೀಯರು ಪ್ರಧಾನರಾಗಿದ್ದರೆಂದು ತಿಳಿಯಬಹುದು. ಇದನ್ನು ಭಟ್ಕಳದ ಒಂದು ವೀರಗಲ್ಲಿನ ಶಾಸನವು ಸಮರ್ಥಿಸುತ್ತದೆ. ಇದರಂತೆ 'ನಾಯಕ ಸಮಾಜ'ದಲ್ಲಿ ಆಸ್ತಿಯ ಹಕ್ಕು ಸಂತತಿ ಪರಂಪರೆಯಾಗಿ 'ಹೆಂಣಿಗೆ ದಾನ ಗಂಡಿಮೂಲ' ನಡೆದುಕೊಂಡು ಬರುತ್ತದೆ.[6] ಸತಿ ಚಿಹ್ನೆ ಮತ್ತು ವೀರನು ಸಾಯುವ ದೃಶ್ಯವು ಒಟ್ಟಿಗೆ ಒಂದೇ ಕಲ್ಲಿನಲ್ಲಿರುವುದು ತ್ರಾಸಿ ವೀರಗಲ್ಲಿನ ವೈಶಿಷ್ಟ್ಯ.

---

3. *Karnataka Inscriptions*, Vol. III, Part I, No. 12 and 13
4. Heras : '*The Expansion of Wars of Venkatappa Nayaka of Ikkeri*', *Indian Historical Records Commission*, XI, 1928, p. 113; ಬಿ. ಎಸ್. ಶಾಸ್ತ್ರಿ : ಕೆಳದಿಯ ಅರಸರೂ ಹಾಗೂ ಪೋರ್ತುಗೀಜರೂ, ಪು. ೫೨
5. ಒಳಿ ಬಂದ ವಂಶ : ಬ್ರಾಹ್ಮಣರಲ್ಲಿ ಗೋತ್ರ ಇದ್ದಂತೆ ; ಇದು ದ್ರಾವಿಡದ್ದು–ವಿವರಗಳಿಗೆ ನೋಡಿ : *Studies in Tuluva History and Culture*, pp. 241–247
6. *K.I.*, Vol. III, No. 13, Lines 5-6